ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಮತ್ತು ಕಾರ್ಮಿಕ ಅಧಿಕಾರಿ,
ಉಪ–ವಿಭಾಗ–2, ವಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಸಂಖ್ಯೆ: ಕಾ.ಅ.ಬಿ–2:ಕಾನಪ:ಮಪ್ರ:ಎಸ್.ಆರ್.ನಂ.140/2010, ದಿನಾಂಕ:16ನೇ ಆಗಸ್ಟ್, 2010**

| **ಅರ್ಜಿದಾರರು** | **ವಿರುದ್ದ** | **ಪ್ರತಿವಾದಿಗಳು** |
|---|---|---|
| ಶ್ರೀಮತಿ ಹನಮವ್ವ ಗಂಡ ತಮ್ಮಣ್ಣ ಕರಕುರ, ಮತ್ತು ಇತರರು, ಸಾ:ಅಬ್ಬಿಹಾಳ, ತಾ:ಮುದ್ದೇಬಿಹಾಳ, ಜಿ:ವಿಜಾಪುರ. | | 1) ಶ್ರೀ ಮಹ್ಮದ ಸಾದಿಕ ತಂದೆ ಅಮೀರಶೇಖ, ಸಾ:ಗುಲ್ಷನ್ ಮಂಜಿಲ್, ಚರ್ಚ್ ರೋಡ್, ವನಗುದ್ದೆ ಗ್ರಾಮ, ಕೊರ್ಟಪಾಡಿ ಅಗ್ರಹಾರ ಹತ್ತಿರ, ಕಟ್ಟಪಾಡಿ, ತಾ:ಜಿ:ಉಡುಪಿ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ತಮ್ಮಣ್ಣ ಕರಕುರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:24.11.2008ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಪಿ.ಆರ್.1272 ಮತ್ತು ಕಾರ್ಮಿಕ ಅಧಿಕಾರಿ,
ಉಪ–ವಿಭಾಗ–2, ವಿಜಾಪುರ.

**ಕಾರ್ಮಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಾಇ208 ಎಲ್‌ಇಟಿ 2010, ಬೆಂಗಳೂರು, ದಿನಾಂಕ:13ನೇ ಆಗಸ್ಟ್, 2010**

ದಿನಾಂಕ:01.01.2010ರಲ್ಲಿರುವಂತೆ ಕಾರ್ಮಿಕ ಇಲಾಖೆಯ ಅಪರ ಕಾರ್ಮಿಕ ಆಯುಕ್ತರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ನಾಗರೀಕ ಸೇವಾ (ಜೇಷ್ಠತೆ) ನಿಯಮಾವಳಿ, 1957ರ ನಿಯಮ 10(2) (ಎ)ರ ಅಡಿಯಲ್ಲಿ, ಈ ಕೆಳಗಿನ ಅನುಬಂಧದಲ್ಲಿ ಇರುವಂತೆ ಪ್ರಕಟಿಸಲಾಗಿದೆ.

ಈ ಸಂಬಂಧ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ, ಈ ಅಧಿಸೂಚನೆಯು, ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ, ಸರ್ಕಾರದ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ವಿಕಾಸಸೌಧ, ಬೆಂಗಳೂರು–1 ಇವರಿಗೆ ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿದೆ.

**ಅನುಬಂಧ**

**(ದಿನಾಂಕ:01.01.2010ರಲ್ಲಿದ್ದಂತೆ ಅಪರ ಕಾರ್ಮಿಕ ಆಯುಕ್ತರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿ)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 1. | ಶ್ರೀ ಎಸ್. ನರಸಿಂಹಯ್ಯ | 15.01.1951 | 23.08.1974 | 21.07.1999 |
| 2. | ಶ್ರೀ ಎಸ್. ಮಂಜುನಾಥ ಶಾಸ್ತ್ರಿ | 28.09.1950 | 05.08.1976 | 27.10.2007 |
| 3. | ಶ್ರೀ ಗುರುದಾಸ್ ಎಂ.ಭಟ್ | 13.11.1952 | 07.08.1978 | 16.07.2008 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

ಪಿ.ಆರ್.1281

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ,**
**ರಾಮನಗರ ಜಿಲ್ಲೆ, ರಾಮನಗರ**

**ಪ್ರಕಟಣೆ ಸಂಖ್ಯೆ: ಕಾಅರಾ/ಕಾನಪ/ಮರಣ/ಸಿಆರ್–20/2010, ದಿನಾಂಕ:30ನೇ ಜುಲೈ, 2010**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ಶ್ರೀಮತಿ ಪ್ರೇಮ ಕೋಂ ಪಂಚಲಿಂಗೇ ಗೌಡ,
2) ಶ್ರೀ ಪಿ.ಕೆ. ಪಂಚಲಿಂಗೇಗೌಡ,
ಪಂಚಲಿಂಗೇಗೌಡನ ದೊಡ್ಡಿ, ಕೆರಗೊಡು ಹೋಬಳಿ,
ಮಂಡ್ಯ ತಾಲ್ಲೂಕು/ ಜಿಲ್ಲೆ.

1) ಶ್ರೀಮತಿ ಶಾಂತ ಟಿ.
ನಂ.240, 5ನೇ ಕ್ರಾಸ್, ಕೆ.ಜಿ.ನಗರ, ಬಸವನಗುಡಿ,
ಬೆಂಗಳೂರು–560 004.
2) ದಿ ಮ್ಯಾನೇಜರ್,
ಮೆ: ಫ್ಯೂಚರ್ ಜನರಲ್ ಇಂಡಿಯಾ ಇನ್ಸೂರೆನ್ಸ್
ಕಂ.ಲಿ., ಯುನಿಟ್ ನಂ.201, 202, 2ನೇ ಫ್ಲೋರ್,
ಇನ್ ಲ್ಯಾಂಡ್ ಅವೆನ್ಯೂ, ಎಮ್.ಜಿ. ರಸ್ತೆ, ಬಲ್ಲಾಳ್
ಬಾಗ್, ಮಂಗಳೂರು–575 003.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:17.06.2010ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಮಗನಾದ ಸಂದೀಪ್ ಎಂಬುವವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಯವರ ಕಾರ್‌ನಲ್ಲಿ ಚಾಲಕನ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಕಾರ್ಮಿಕ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೀನಾಪಾಟೀಲ**

ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರವರ ನ್ಯಾಯಾಲಯ,
ರಾಮನಗರ ಜಿಲ್ಲೆ, ರಾಮನಗರ.

ಪಿ.ಆರ್.1256

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–I , ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್–29/10ಎಫ್, ದಿನಾಂಕ:9ನೇ ಆಗಸ್ಟ್, 2010**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಶಾರದ W/o ಲೇಟ್ ವೆಂಕಟೇಶ,<br>2) ಶ್ರೀಮತಿ ಪುಟ್ಟಮ್ಮ, W/o ಲೇಟ್ ತಿಮ್ಮಯ್ಯ<br>ವಾಸ: ತುಮಕೂರು ಟೌನ್, ವಾರ್ಡ್ ನಂ.<br>14–572101, ತುಮಕೂರು ತಾಲ್ಲೂಕು & ಡಿಸ್ಟ್ರಿಕ್ | | 1) ಶ್ರೀ ಪ್ರದೀಪ್ ಕುಮಾರ್, S/o ನಾಗರಾಜು,<br>ವಾಸ: ಕುವೆಂಪು ನಗರ, ಬೆಳಗುಂಬ ರೋಡ್,<br>ತುಮಕೂರು ತಾಲ್ಲೂಕು.<br>2) ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., GMA ಬಿಲ್ಡಿಂಗ್<br>ಎಂ.ಸಿ. ರೋಡ್, ತುಮಕೂರು. |

**ಅಧಿಸೂಚನೆ**

ಅರ್ಜಿದಾರನಾದ/ ಅರ್ಜಿದಾರಳಾದ ಶ್ರೀಮತಿ ಶಾರದ W/o ಲೇಟ್ ವೆಂಕಟೇಶ ಇವರು ತಮ್ಮ ಗಂಡನಾದ ಶ್ರೀ ವೆಂಕಟೇಶ್ ಇವರು 1ನೇ ಪ್ರತಿವಾದಿಗಳಾದ ಕೆಎ–06–/ಎ–4989 ಲಾರಿಯಲ್ಲಿ ಕ್ಲೀನರ್ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:26.06.2010 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ
ಉಪವಿಭಾಗ– I, ಮಂಗಳೂರು.

ಪಿ.ಆರ್.1257

**IN THE COURT OF COMMISSIONER FOR WORKMEN'S COMPENSATION, BIDAR**

**No.LOB/WCA/Cr-F-38/2010,**

| **Applicants:** | **V/s** | **Respondents:** |
|---|---|---|
| Smt. Jahera begum W/o late Md<br>Haneef age 55 yrs, occu: House Hold<br>R/o Village, Jamisthanpur taluk &<br>dist. Bidar. and one other. | | 1) M/s Prakash power planning Pvt. Ltd., IAMI self<br>SFHS Area BTM layout 2nd stage and Bangalore.<br>2) M/s Genestic techniques Pvt., Ltd., plot No.1-A202<br>Kollar, Bidar.<br>3) M/s Tata AIG G.I. Co. Ltd., Anura denter 4th Floor,<br>Mawahalli, Cover road, Andheri West,<br>Mumbai 400093. |

**PROCLAIMATION**

Sri/Smt. Tahera begum W/o. F/o. S/o. Late Md Sajeed R/o Village Jamisthanpur tq: & Dist. Bidar. have/has filed application in this court claiming compensation stating that late Md Sajeed was working as Electrical helper, Under the Respondent No I he met with an accident arising out of and during the course of employment as a result he died on 06.06.2010.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this

proclamation, if no applications on objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

PR-1258

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್–27/10, ದಿನಾಂಕ:3ನೇ ಆಗಸ್ಟ್, 2010**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀಮತಿ ನಾಗರತ್ನಮ್ಮ ಪತಿ: ಲೇಟ್ ರವಿಕುಮಾರ್, ವಯಸ್ಸು: ಸುಮಾರು 20 ವರ್ಷ.
2) ಕುಮಾರಿ: ದಿವ್ಯಾ ತಂದೆ: ಲೇಟ್ ರವಿಕುಮಾರ್, ವಯಸ್ಸು: 6 ತಿಂಗಳು ಅಪ್ರಾಪ್ತರು ಇವರ ಪರವಾಗಿ ಸ್ವಾಭಾವಿಕ ಸಂರಕ್ಷಕರಾದ 1ನೇ ಅರ್ಜಿದಾರರಾದ ತಾಯಿ ನಾಗರತ್ನಮ್ಮ ಪ್ರತಿನಿಧಿಸುವರು.
3) ಶ್ರೀ ಅಕ್ಕಾಲಪ್ಪಾ ತಂದೆ: ನರಸಿಂಹಪ್ಪ, ವಯಸ್ಸು:ಸುಮಾರು 58 ವರ್ಷ.
4) ಶ್ರೀಮತಿ ಅಕ್ಕಮ್ಮ ಪತಿ: ಅಕ್ಕಾಲಪ್ಪ, ವಯಸ್ಸು:50 ವರ್ಷ.
ಎಲ್ಲರ ವಿಳಾಸ: ರಾಘವೇಂದ್ರ ಕಾಲೋನಿ, ಮಧುಗಿರಿ ಟೌನ್, ತುಮಕೂರು ಜಿಲ್ಲೆ.

1) ಕೆ. ಬದ್ರಿನಾರಾಯಣ ತಂದೆ: ಲೇಟ್ ಕೃಷ್ಣಶೆಟ್ಟಿ, ವಯಸ್ಸು: ಸುಮಾರು 54 ವರ್ಷ, ವಾಸ: ಮಂಜುನಾಥ ನಿವಾಸ, ಶಂಕರ್ ಟಾಕೀಸ್ ರಸ್ತೆ, ಮಧುಗಿರಿ ತುಮಕೂರು ಜಿಲ್ಲೆ.
2) ರಿಲಯನ್ಸ್ ಜನರಲ್ ಇನ್‌ಶ್ಯೂರೆನ್ಸ್ ಕಂ.ಲಿ., ನಂ.413/1 ಮತ್ತು 3/2 11ನೇ ಮೈನ್, 3ನೇ ಬ್ಲಾಕ್, ಜಯನಗರ, ಬೆಂಗಳೂರು–560061.

**ಪ್ರಕಟಣೆ**

1ನೇ ಅರ್ಜಿದಾರರ ಪತಿ ರವಿಕುಮಾರ್ 1ನೇ ಪ್ರತಿವಾದಿಗಳ ಕಾರ್ ಸಂಖ್ಯೆ: ಕೆಎ–06–ಬಿ–3199 ಕಾರಿನಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:13.04.2010ರಂದು ಅರಸಿಕೆರೆ ಕೆರೆ ಟ್ಯಾಂಕ್ ಕೋಡಿ ಎನ್.ಎಚ್–4 ರಸ್ತೆ, ಅರಸಿಕೆರೆ ಗ್ರಾಮಾಂತರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಆದ ಅಪಘಾತದಲ್ಲಿ ಮೃತ ಪಟ್ಟಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್–30/10, ದಿನಾಂಕ:5ನೇ ಜುಲೈ, 2010**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀಮತಿ ಗಂಗಮ್ಮ ಪತಿ: ವೀರಣ್ಣ ವಯಸ್ಸೂ ಸುಮಾರು 45 ವರ್ಷ.
2) ವೀರಣ್ಣ ತಂದೆ: ಉದ್ದಣ್ಣ, ವಯಸ್ಸು ಸುಮಾರು 48 ವರ್ಷ, ಈರ್ವರ ವಿಳಾಸ: ಚಿನ್ನೇನಹಳ್ಳಿ, ಕಳ್ಳಂಬೆಳ್ಳ ಹೋಬಳಿ, ಶಿರಾ ತಾಲ್ಲೂಕು.

1) ದೊಡ್ಡರಂಗಯ್ಯ @ ದೊಡ್ಡರಂಗಪ್ಪ ತಂದೆ: ಚಿಕ್ಕರಂಗಪ್ಪ @ ಚಿಕ್ಕರಂಗಯ್ಯ, ವಯಸ್ಸು ಸುಮಾರು 65 ವರ್ಷ, ವಾಸ: ಚನ್ನನಕುಂಟೆ ವಿಲೇಜ್, ಕಸಬಾ ಹೋಬಳಿ, ಶಿರಾ ತಾಲ್ಲೂಕು.
2) ರಿಲಯನ್ಸ್ ಜನರಲ್ ಇನ್‌ಶ್ಯೂರೆನ್ಸ್ ಕಂ.ಲಿ. ನಂ.4/3/1 ಮತ್ತು 3/2 11ನೇ ಮೈನ್, 3ನೇ ಬ್ಲಾಕ್, ಜಯನಗರ, ಬೆಂಗಳೂರು–560061.

## ಪ್ರಕಟಣೆ

ಅರ್ಜಿದಾರರ ಮಗ ಸಿ.ವಿ. ಕುಮಾರಸ್ವಾಮಿ 1ನೇ ಪ್ರತಿವಾದಿಗಳ ಟ್ರಾಕ್ಟರ್ ಟ್ರೈಲರ್ ಸಂಖ್ಯೆ:ಕೆಎ–06–ಟಿ–2881–2882 ಟ್ರಾಕ್ಟರಿನಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:11.10.2010ರಂದು ಕೊರಟಗೆರೆ ತಾಲ್ಲೂಕು ಓಬನಹಳ್ಳಿ ಗ್ರಾಮದ ರಾಮಜ್ಜ ಅವರ ಜಮೀನಿನ ಬಳಿ ಆದ ಅಪಘಾತದಲ್ಲಿ ಆದ ಗಾಯಗಳಿಂದಾಗಿ ಮೃತಪಟ್ಟಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–31/10, ದಿನಾಂಕ:8ನೇ ಜುಲೈ, 2010**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಗೌರಮ್ಮ ಪತಿ: ಲೇಟ್ ಸಿದ್ದಪ್ಪ, ವಯಸ್ಸು ಸುಮಾರು 30 ವರ್ಷ.<br>2) ರವಿ ತಂದೆ: ಲೇಟ್ ಸಿದ್ದಪ್ಪ, ಅಪ್ರಾಪ್ತರು.<br>3) ನವೀನ ಕುಮಾರ ತಂದೆ: ಲೇಟ್ ಸಿದ್ದಪ್ಪ ಅಪ್ರಾಪ್ತರು.<br>ಇಬ್ಬರು ಅಪ್ರಾಪ್ತರ ಪರವಾಗಿ ಸ್ವಾಭಾವಿಕ ಸಂರಕ್ಷಕರಾದ ಅವರ ತಾಯಿ 1ನೇ ಅರ್ಜಿದಾರರು ಪ್ರತಿನಿಧಿಸುವವರು, ಈರ್ವರ ವಿಳಾಸ: ಬೆಳ್ಳಾವಿ, ತುಮಕೂರು ತಾಲ್ಲೂಕು. | | 1) ಜೆ. ನವೀನ ತಂದೆ: ಜಯಣ್ಣ ಟಿ.ಎಂ. ವಾಸ: ಬನಶಂಕರಿ, ತುಮಕೂರು.<br>2) ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ತುಮಕೂರು ಶಾಖೆ. ಟಿ.ಜಿ.ಎಂ.ಎ. ಬಿಲ್ಡಿಂಗ್, ಜೆ.ಸಿ. ರೋಡ್, ತುಮಕೂರು. |

## ಪ್ರಕಟಣೆ

ಅರ್ಜಿದಾರರ ಪತಿ ಸಿದ್ದಪ್ಪ ರವರು 1ನೇ ಪ್ರತಿವಾದಿಗಳ ಎಸ್‌ಎಲ್‌ಎನ್‌ಎಸ್ ಲಾರಿ ಸಂಖ್ಯೆ:ಕೆಎ–05–ಡಿ–1188 ಲಾರಿಯಲ್ಲಿ ಕ್ಲೀನರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:16.02.2010ರಂದು ಸುರನಹಳ್ಳಿ ಗೇಟ್ ಚಳ್ಳಕೆರೆ ತಾಲ್ಲೂಕು ಬಳಿ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.1261

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on 'clean segregated corn (corn/maize)'-reg.

**Ref:** Application Dated:26.04.2010 of Agro Tech Foods Limited, Godown No.9 P.V. Shetty Co., Warehouse Division, Survey No.3/3, Pattanagere, Rajarajeshwarinagar, Bangalore-560098.

In the application cited above, Agro Tech Foods Limited, Godown No.9 P.V. Shetty Co., Warehouse Division, Survey No.3/3, Pattanagere, Rajarajeshwarinagar, Bangalore-560098, has sought clarification regarding the rate of tax applicable on 'clean segregated corn (corn/maize)'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.34/10-11, Dated:20th July, 2010**

It is clarified that "maize (corn)" is exempt under entry 16 of the First Schedule to the Karnataka Value Added Tax Act, 2003.

**PRADEEP SINGH KHAROLA**
Commissioner of Commercial Taxes,
(Karnataka), Bangalore.

PR-1264

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ.ಕಾಅದಾ:ಕಾನಪ:ಸಿಆರ್–111/10, ದಿನಾಂಕ:9ನೇ ಆಗಸ್ಟ್, 2010**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಶಾರದಮ್ಮ ಕೋಂ ರುದ್ರಪ್ಪ<br>2) ಶ್ರೀ ರುದ್ರಪ್ಪ ಬಿನ್ ಸಿದ್ದಪ್ಪ, ಚಿಕ್ಕಮ್ಯಾಗಳಗೆರೆ ಗ್ರಾಮ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | | 1) ಶ್ರೀ ಹರಿಹರದ ಹಾಲೇಶಪ್ಪ ಬಿನ್ ಶಿವಪ್ಪ ಪಿಕ್‌ಅಫ್ ವ್ಯಾನ್ ಮಾಲೀಕರು ನಂ.1, ಕೆಎ–17ಎ–8879, ಹಿರೇಮ್ಯಾಗಳಗೆರೆ ಗ್ರಾಮ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ.<br>2) ದಿ ಮ್ಯಾನೇಜರ್<br>ಶ್ರೀರಾಮ ಜನರಲ್ ಇನ್ಶೂರೆನ್ಸ್ ಕಂ.ಲಿ., ಈ 8 ರೀಕೋ ಇಂಡಸ್ಟ್ರಿಯಲ್ ಏರಿಯಾ ಸೀತಾಪುರ ಜಯಪುರ್ ರಾಜಸ್ಥಾನ್ ರಾಜ್ಯ. |

**ಪ್ರಕಟಣೆ**

ಶ್ರೀ: ಶ್ರೀಮತಿ ಶಾರದಮ್ಮ ಮತ್ತು ರುದ್ರಪ್ಪ ಇವರುಗಳಾದ ನಾವು ಮೃತ ಶ್ರೀ ನಾಗರಾಜ ಇವರ ತಾಯಿ ಮತ್ತು ತಂದೆ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ನಾಗರಾಜ ರವರು ಒಂದನೇ ಪ್ರತಿವಾದಿಗಳಾದ ಹರಿಹರ ಹಾಲೇಶಪ್ಪ ಇವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಮತ್ತು
ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1270

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಡಿಪಿಎಆರ್ 18 ಹೆಚ್‌ಹೆಚ್‌ಎಲ್ 2010, ಬೆಂಗಳೂರು, ದಿನಾಂಕ:7ನೇ ಸೆಪ್ಟೆಂಬರ್, 2010**

ದಿನಾಂಕ: 13.09.2010ರ ಸೋಮವಾರದಂದು ಈ ಕೆಳಕಂಡ ವಿಧಾನ ಸಭಾ ಕ್ಷೇತ್ರಗಳಲ್ಲಿ ಉಪಚುನಾವಣೆ ನಡೆಯಲಿದ್ದು, ಸದರೀ ಕ್ಷೇತ್ರಗಳ ವ್ಯಾಪ್ತಿಯಲ್ಲಿರುವಂತಹ ಮತದಾರರು ಮತ ಚಲಾಯಿಸಲು ಅನುಕೂಲವಾಗುವಂತೆ ಆಯಾ ಮತ ಕ್ಷೇತ್ರಗಳ ಎಲ್ಲಾ ಕೇಂದ್ರ ಹಾಗೂ ರಾಜ್ಯ ಸರ್ಕಾರಿ ಕಛೇರಿಗಳಿಗೆ, ಶಾಲಾ ಕಾಲೇಜುಗಳಿಗೆ, (ಅನುದಾನಿತ ಶಿಕ್ಷಣ ಸಂಸ್ಥೆಗಳು ಒಳಗೊಂಡಂತೆ) ಎಲ್ಲಾ ಕಾರ್ಖಾನೆಗಳಿಗೆ, ನಿಗಮಗಳಿಗೆ ಸ್ಥಳೀಯ ಸಂಸ್ಥೆಗಳಿಗೆ ಮಂಡಳಿಗಳಿಗೆ ಹಾಗೂ ನೆಗೋಷಿಯೇಬಲ್ ಇನ್ಸ್ಟ್ರುಮೆಂಟ್ಸ್ ಆಕ್ಟ್ 1881ರ ಪ್ರಕಾರ ಎಲ್ಲಾ ಬ್ಯಾಂಕ್‌ಗಳಿಗೂ ಹಾಗೂ ಜೀವ ವಿಮಾ ನಿಗಮಗಳಿಗೆ ಅನ್ವಯವಾಗುವಂತೆ ಸಾರ್ವತ್ರಿಕ ರಜೆಯನ್ನು ಸರ್ಕಾರವು ಘೋಷಿಸಿದೆ.

| ಕ್ರ.ಸಂ. | ವಿಧಾನ ಸಭಾ ಕ್ಷೇತ್ರಗಳ ಸಂಖ್ಯೆ ಹಾಗೂ ಹೆಸರು | ಜಿಲ್ಲೆಯ ಹೆಸರು |
|---|---|---|
| 1. | 44–ಗುಲ್ಬರ್ಗಾ ದಕ್ಷಿಣ | ಗುಲ್ಬರ್ಗಾ |
| 2. | 127–ಕಡೂರು | ಚಿಕ್ಕಮಗಳೂರು |

ಈ ರಜೆಯು ತುರ್ತು ಕೆಲಸಗಳಿಗೆ ಅನ್ವಯವಾಗುವುದಿಲ್ಲ.

ಸದರಿ ಕ್ಷೇತ್ರಗಳಲ್ಲಿ ಮತದಾನವು ಸುಸೂತ್ರವಾಗಿ ನಡೆಯಲು ಅನುಕೂಲವಾಗುವಂತೆ ಮತದಾನ ನಡೆಯುವ ಮತಗಟ್ಟೆಗಳನ್ನು ಸರ್ಕಾರಿ ಕಛೇರಿಗಳಲ್ಲಿ ಹಾಗೂ ಸರ್ಕಾರಿ ಶಾಲೆಗಳಲ್ಲಿ ಸ್ಥಾಪಿಸಿದಲ್ಲಿ ಅಂತಹ ಕಛೇರಿ ಹಾಗೂ ಶಾಲೆಗಳಿಗೆ ದಿನಾಂಕ:12.09.2010ರಂದು ಭಾನುವಾರ (ಪೂರ್ವ ತಯಾರಿಗಾಗಿ) ಮತ್ತು ಮತ ಎಣಿಕೆಯ ದಿನದಂದು ಮತದಾನ ಎಣಿಕೆ ನಡೆಯುವ ಕೇಂದ್ರ ಸ್ಥಾನದಲ್ಲಿ ಮಾತ್ರ ರಜಾ ಘೋಷಿಸಲು ಅವಶ್ಯಕತೆ ಇದ್ದಲ್ಲಿ ಸಂಬಂಧಪಟ್ಟ ಚುನಾವಣಾಧಿಕಾರಿಗಳು ಕ್ರಮ ತೆಗೆದುಕೊಳ್ಳತಕ್ಕದ್ದು.

ದಿನಾಂಕ:31.08.2010ರಂದು ಹೊರಡಿಸಲಾದ ಸಮಸಂಖ್ಯೆಯ ಅಧಿಸೂಚನೆಯನ್ನು ಮಾರ್ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮ**

ಪಿ.ಆರ್.1340

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

## ಪ್ರಕಟಣೆ

**ಸಂಖ್ಯೆ:ಜಿಸಕಅ/ರಾ/ಕಾಪತ/ಸಿಆರ್–38/10–11, ದಿನಾಂಕ:6ನೇ ಜುಲೈ, 2010**

**ವಿಷಯ:** 2010–11ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣ ಯೋಜನೆಯಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್–89, ದಿನಾಂಕ:02.11.1990.

2) ಸರ್ಕಾರದ ಆದೇಶ ಸಂಖ್ಯೆ:ಸಕಇ–349/ಪಕವಿ–2005, ದಿನಾಂಕ:28.01.2006.

2010–11ನೇ ಸಾಲಿಗೆ ರಾಮನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಸಮಾಜ ಕಲ್ಯಾಣ ಇಲಾಖಾವತಿಯಿಂದ "ಆಡಳಿತ ನ್ಯಾಯಾಧಿಕರಣ ಯೋಜನೆಯಡಿ ತರಬೇತಿ" ನೀಡಲು ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಈ ಕೆಳಗೆ ನಮೂದಿಸಿರುವ ಷರತ್ತುಗಳ ಪ್ರಕಾರ ಅರ್ಹ ಅಭ್ಯರ್ಥಿಗಳು ಮಾತ್ರ ಈ ಕಛೇರಿಯಿಂದ ಅರ್ಜಿಗಳನ್ನು ಪಡೆದುಕೊಂಡು. ಈ ಪ್ರಕಟಣೆಯು ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಒಂದು ತಿಂಗಳೊಳಗೆ ಅಥವಾ ದಿನಾಂಕ:16.08.2010ರೊಳಗಡೆ ಅರ್ಜಿ ಸಲ್ಲಿಸತಕ್ಕದ್ದು. ನಂತರ ಬಂದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಷರತ್ತುಗಳು:**

1) ರಾಮನಗರ ಜಿಲ್ಲಾ ವ್ಯಾಪ್ತಿಗೆ ಬರುವ 4 ತಾಲ್ಲೂಕುಗಳ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.

2) ಅಭ್ಯರ್ಥಿಯು 35 ವರ್ಷ ವಯೋಮಿತಿಯೊಳಗಿರಬೇಕು.

3) ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷದ ಒಳಗೆ ಕಾನೂನು ಪದವಿಯನ್ನು ಪಡೆದಿರಬೇಕು.

4) ತರಬೇತಿ ಅವಧಿ 4 ವರ್ಷಗಳಾಗಿದ್ದು, ಮಾಸಿಕ ರೂ.1000/– ಗಳ ಶಿಷ್ಯವೇತನ ನೀಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

6) ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಮಧ್ಯಂತರದಲ್ಲಿ ಬಿಟ್ಟು ಹೋಗಬಾರದು. ಬಿಟ್ಟು ಹೋದ ಪಕ್ಷದಲ್ಲಿ ತರಬೇತಿಯ ಅವಧಿಯಲ್ಲಿ ನೀಡಿದ ಶಿಷ್ಯ ವೇತನವನ್ನು ಶೇ.10ರಷ್ಟು ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಈ ನಿಯಮ ಕೇಂದ್ರ ಮತ್ತು ರಾಜ್ಯ ಸರ್ಕಾರಿ ಸೇವೆ ಮತ್ತು ಉದ್ದಿಮೆಗಳಲ್ಲಿ ನೇಮಕ ಹೊಂದುವವರಿಗೆ ಅನ್ವಯಿಸುವುದಿಲ್ಲ.

7) ಸುಳ್ಳು ದಾಖಲೆ ಮಾಹಿತಿಯನ್ನು ಒದಗಿಸಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನನ್ವಯ ಶಿಕ್ಷೆಗೆ ಗುರಿ ಪಡಿಸಲಾಗುವುದು.

8) ಅರ್ಜಿಯಲ್ಲಿನ ಮಾಹಿತಿಯನ್ನು ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

9) ಆಯ್ಕೆಯಾದ ಸಮಿತಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

10) ಅರ್ಜಿಗಳನ್ನು ಪಡೆಯಬೇಕಾದ ಮತ್ತು ಸಲ್ಲಿಸಬೇಕಾದ ವಿಳಾಸ ಈ ಕೆಳಕಂಡಂತಿದೆ.

11) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ರಾಮನಗರ ಜಿಲ್ಲೆಯ ವ್ಯಾಪ್ತಿಯೊಳಗಡೆ ಮಾತ್ರ ತರಬೇತಿ ನೀಡಲಾಗುವುದು. ಅರ್ಜಿ ನಮೂನೆಗಳನ್ನು ಪಡೆದು, ಪೂರ್ಣ ಭರ್ತಿ ಮಾಡಿ ದಾಖಲಾತಿಗಳೊಂದಿಗೆ ಸಲ್ಲಿಸಬೇಕಾದ ವಿಳಾಸ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ,
ರಾಮನಗರ ಜಿಲ್ಲೆ, ಕೆಂಪೇಗೌಡ ವೃತ್ತ,
ಮಾಗಡಿ ಮುಖ್ಯರಸ್ತೆ, ರಾಮನಗರ–517511, ದೂರವಾಣಿ ಸಂಖ್ಯೆ:080–7273003.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ,
ರಾಮನಗರ ಜಿಲ್ಲೆ, ರಾಮನಗರ.

ಪಿ.ಆರ್.1341

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

## ಆದೇಶ

## ನಂ.ಚು(2) ವಿವ/90/10–11, ದಿನಾಂಕ:26ನೇ ಆಗಸ್ಟ್, 2010

2010 ರಲ್ಲಿ ನಡೆಯಲಿರುವ ನಗರ ಸ್ಥಳೀಯ ಸಂಸ್ಥೆಗಳ ಉಪ ಚುನಾವಣೆಗೆ ಸಂಬಂಧಿಸಿದಂತೆ, ಕರ್ನಾಟಕ ಮುನಿಸಿಪಾಲಿಟಿಗಳ (ಕೌನ್ಸಿಲರುಗಳ ಚುನಾವಣೆ) ನಿಯಮ 1977 ರ ನಿಯಮ 4 ರಂತೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಡಾ: ಸಿ. ಸೋಮಶೇಖರ, ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು, ನಾನು ಕೆಳಕಂಡ ಕೋಷ್ಟಕದ ಅಂಕಣ (2) ರಲ್ಲಿ ಕಂಡ ನಗರ ಸ್ಥಳೀಯ ಸಂಸ್ಥೆಗಳ ಅಂಕಣ (3) ರಲ್ಲಿ ಕಂಡ ವಾರ್ಡ್‌ಗಳಿಗೆ ಚುನಾವಣೆಗಳನ್ನು ನಡೆಸಲು ಅಂಕಣ (4) ಮತ್ತು (5) ರಲ್ಲಿ ಕಂಡ ಅಧಿಕಾರಿಗಳನ್ನು ಕ್ರಮವಾಗಿ ಚುನಾವಣಾಧಿಕಾರಿ ಮತ್ತು ಸಹಾಯಕ ಚುನಾವಣಾಧಿಕಾರಿಗಳನ್ನಾಗಿ ಗೊತ್ತುಪಡಿಸಿದ್ದೇನೆ.

| ಕ್ರ. ಸಂ. | ನಗರ ಸ್ಥಳೀಯ ಸಂಸ್ಥೆಗಳ ಹೆಸರು | ವಾರ್ಡ್‌ಗಳ ಸಂಖ್ಯೆ | ಚುನಾವಣಾಧಿಕಾರಿಯಾಗಿ ನೇಮಕಗೊಂಡಿರುವ ಅಧಿಕಾರಿ ಪದನಾಮ ಮತ್ತು ಕಛೇರಿ | ಸಹಾಯಕ ಚುನಾವಣಾಧಿಕಾರಿಯಾಗಿ ನೇಮಕಗೊಂಡಿರುವ ಅಧಿಕಾರಿ ಪದನಾಮ ಮತ್ತು ಕಛೇರಿ |
|---|---|---|---|---|
| 1 | 2 | 3 | 4 | 5 |
| 1) | ನಗರಸಭೆ, ತುಮಕೂರು | 30 | ಉಪವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು. | ತಹಶೀಲ್ದಾರ್, ತುಮಕೂರು ತಾಲ್ಲೂಕು, ತುಮಕೂರು. |
| 2) | ಪುರಸಭೆ, ಮಧುಗಿರಿ | 10 | ತಹಶೀಲ್ದಾರ್, ಮಧುಗಿರಿ ತಾಲ್ಲೂಕು, ಮಧುಗಿರಿ | ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಮಧುಗಿರಿ |

**ಡಾ: ಸಿ. ಸೋಮಶೇಖರ**
ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

ಪಿ.ಆರ್.1346

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ತಿದ್ದುಪಡಿ ಆದೇಶ**

**ನಂ.ಚು(2) ವಿವ/90/10–11, ದಿನಾಂಕ:30ನೇ ಆಗಸ್ಟ್, 2010**

2010 ರಲ್ಲಿ ನಡೆಯಲಿರುವ ನಗರ ಸ್ಥಳೀಯ ಸಂಸ್ಥೆಗಳ ಉಪ ಚುನಾವಣೆಗೆ ಸಂಬಂಧಿಸಿದಂತೆ, ಕೆಳಕಂಡ ಕೋಷ್ಟಕದ ಅಂಕಣ (2) ರಲ್ಲಿ ಕಂಡ ನಗರ ಸ್ಥಳೀಯ ಸಂಸ್ಥೆಗಳ ಅಂಕಣ (3) ರಲ್ಲಿ ಕಂಡ ವಾರ್ಡ್‌ಗಳಿಗೆ ಚುನಾವಣೆಗಳನ್ನು ನಡೆಸಲು ಅಂಕಣ (4) ಕಂಡ ಅಧಿಕಾರಿಯನ್ನು ಸಮಸಂಖ್ಯೆ ಆದೇಶ ದಿನಾಂಕ:26.8.10 ರಂತೆ ಸಹಾಯಕ ಚುನಾವಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮಧುಗಿರಿ ತಾಲ್ಲೂಕು ತಹಶೀಲ್ದಾರರು ದಿನಾಂಕ:28.8.10ರ ಕ್ರ : ಚು(1)ವಿವ 12/10–11 ರಲ್ಲಿ ಆಡಳಿತಾತ್ಮಕ ಕಾರಣದಿಂದ ಸಹಾಯಕ ಚುನಾವಣಾಧಿಕಾರಿಗಳನ್ನು ಬದಲಾವಣೆ ಮಾಡಿಕೊಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಗಣಿಸಿ, ಅಂಕಣ 4 ರಲ್ಲಿ ಕಂಡ ಅಧಿಕಾರಿಗೆ ಬದಲಾಗಿ ಅಂಕಣ 5ರಲ್ಲಿ ಕಂಡ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಹಾಯಕ ಚುನಾವಣಾಧಿಕಾರಿಯಾಗಿ ನೇಮಿಸಿದೆ.

| ಕ್ರ. ಸಂ. | ನಗರ ಸ್ಥಳೀಯ ಸಂಸ್ಥೆಗಳ ಹೆಸರು | ವಾರ್ಡ್‌ಗಳ ಸಂಖ್ಯೆ | ಸಹಾಯಕ ಚುನಾವಣಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಅಧಿಕಾರಿ ವಿವರ | ಈಗ ನೇಮಕ ಮಾಡಿರುವ ಸಹಾಯಕ ಚುನಾವಣಾಧಿಕಾರಿ ವಿವರ |
|---|---|---|---|---|
| 1 | 2 | 3 | 4 | 5 |
| 1) | ಪುರಸಭೆ, ಮಧುಗಿರಿ | 10 | ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಮಧುಗಿರಿ | ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪುರವರ |

**ಡಾ: ಸಿ. ಸೋಮಶೇಖರ**

ಪಿ.ಆರ್.1347 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–32/10, ದಿನಾಂಕ:2ನೇ ಆಗಸ್ಟ್, 2010**

**ಅರ್ಜಿದಾರರು**

1) ಶ್ರೀಮತಿ ಮುದ್ದಮ್ಮ ಪತಿ: ಲೇಟ್ ತಿಮ್ಮಯ್ಯ, ವಯಸ್ಸು ಸುಮಾರು 65 ವರ್ಷ.

2) ನಾರಾಯಣಪ್ಪ ತಂದೆ: ಲೇಟ್ ತಿಮ್ಮಯ್ಯ, ವಯಸ್ಸು ಸುಮಾರು 32 ವರ್ಷ.

ವಿಳಾಸ: ದೇವರ ತೋಪು, ಕೊಡಿಗೇನಹಳ್ಳಿ, ಮಧುಗಿರಿ ತಾಲ್ಲೂಕು.

**ಪ್ರತಿವಾದಿಗಳು**

1) ಜಿ. ಮಹೇಂದ್ರ ತಂದೆ: ಗೋವಿಂದರೆಡ್ಡಿ ವಯಸ್ಸು:40 ವರ್ಷ, ವಾಸ.ನಂ.18, 2ನೇ ಕ್ರಾಸ್, ಹೆಚ್.ಎಂ.ಟಿ. ಲೇಔಟ್, ಮತ್ತಿಕೆರೆ, ಬೆಂಗಳೂರು.

2) ದಿ ಬ್ರ್ಯಾಂಚ್ ಮ್ಯಾನೇಜರ್, ರಾಯಲ್ ಸುಂದರಂ ಅಲಿಯಾನ್ಸ್ ಇನ್‌ಶ್ಯೂರೆನ್ಸ್ ಕಂ.ಲಿ., ಕಾರ್ಪೊರೇಟ್ ಆಫೀಸ್, ಸುಂದರಂ ಟವರ್ಸ್, ನಂ.45 & 46 ವೈಟ್ಸ್ ರಸ್ತೆ, ಚೆನ್ನೈ–600002

ರಿಜಿಸ್ಟರ್ಡ್ ಆಫೀಸ್ ನಂ.21, ಪುತ್ತುಲ್ಲಾರ್ಸ್ ರಸ್ತೆ, ಚೆನ್ನೈ–600002.

ಸರ್ವಿಸ್ ವಿಳಾಸ:

ನಂ.186, 1ನೇ ಅಡ್ಡರಸ್ತೆ, ರಾಘವೇಂದ್ರ ಕಾಂಪ್ಲೆಕ್ಸ್, ಹೊಸೂರು ಮುಖ್ಯರಸ್ತೆ, ವಿಲ್ಸನ್‌ಗಾರ್ಡನ್, ಬೆಂಗಳೂರು–560027.

**ಪ್ರಕಟಣೆ**

1ನೇ ಅರ್ಜಿದಾರರ ಮಗ ಮೃತ ವೆಂಕಟೇಶ್ ರವರು 1ನೇ ಪ್ರತಿವಾದಿಗಳ ಲಾರಿ ಸಂಖ್ಯೆ: ಕೆಎ–04–ಬಿ–6755 ಲಾರಿಯಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:03.04.2010ರಂದು ಸಿದ್ದರ ಬೆಟ್ಟ ಫಾರೆಸ್ಟ್ ನರ್ಸರಿ ಹತ್ತಿರ

ಸಿದ್ದರಬೆಟ್ಟ ದಿಂದ ತುಂಬಾಡಿ ಕೊರಟಗೆರೆ ರಸ್ತೆಯಲ್ಲಿ ಸುಮಾರು ಸಂಜೆ 6.00 ಗಂಟೆಗೆ ಆದ ಅಪಘಾತದಲ್ಲಿ ಮೃತ ಪಟ್ಟಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ,**
**ನಂ.916, ಗಂಗೋತ್ರಿನಗರ ಮುಖ್ಯ ರಸ್ತೆ, (ಎಸ್.ಐ.ಟಿ. ಬ್ಯಾಕ್), ಮಹಾಗಂಗಾ ಆಸ್ಪತ್ರೆ ಎದುರುಗಡೆ,**
**ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–34/10, ದಿನಾಂಕ:31ನೇ ಜುಲೈ, 2010**

**ಅರ್ಜಿದಾರರು**

1) ಶ್ರೀಮತಿ ವಾಜಿಹಾ ಬಾನು ಪತಿ ಲೇಟ್ ಮಂಜರ್ ಪಾಷಾ, ವಯಸ್ಸು ಸುಮಾರು 22 ವರ್ಷ.
2) ಮುನಾರ್ಝಾ ತಂದೆ: ಲೇಟ್ ಮಂಜರ್ ಪಾಷಾ ವಯಸ್ಸು ಸುಮಾರು: 4 ವರ್ಷ, ಇವರು ಅಪ್ರಾಪ್ತರಾಗಿದ್ದು ಇವರ ಪರವಾಗಿ ಇವರ ಸ್ವಾಭಾವಿಕ ಸಂರಕ್ಷಕರಾದ ತಾಯಿ 1ನೇ ಅರ್ಜಿದಾರರು ಪ್ರತಿನಿಧಿಸುವರು.
3) ಬಾಷಾ ತಂದೆ: ಲೇಟ್ ಸೈಯ್ಯದ್ ಮೊಹದ್ದೀನ್ ಸಾಬ, ವಯಸ್ಸು 55 ವರ್ಷ,
4) ಶಾನೂರ್ ಪತಿ: ಬಾಷಾ, ವಯಸ್ಸು 48 ವರ್ಷ,
ಎಲ್ಲರ ವಿಳಾಸ:
ಹೊಸಪೇಟೆ ಹುಲಿಯೂರುದುರ್ಗ ಗ್ರಾಮ, ಹುಲಿಯೂರುದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ.

**ಪ್ರತಿವಾದಿಗಳು**

1) ಜೆ. ನಾಗರಾಜ ತಂದೆ: ಕೆ.ಜಯರಾಮು, ವಯಸ್ಸು:42 ವರ್ಷ.
ವಾಸ: ಕೆ.ಜಿ.ಎನ್. ಟ್ರಾನ್ಸ್‌ಪೋರ್ಟ್ ನಂ.4 ಮಾವಲ್ ಟ್ಯಾಂಕ್‌ಬಂಡ್ ರಸ್ತೆ, ಜರ್ನಲಿಸ್ಟ್ ಕಾಲೋನಿ, ಜೆ.ಸಿ.ರಸ್ತೆ, ಬೆಂಗಳೂರು.
2) ಭಾರತಿ ಅಕ್ಸಾ ಜನರಲ್ ಇನ್‌ಶ್ಯೂರೆನ್ಸ್ ಕಂ.ಲಿ., ಪ್ರೈಡ್ ಕಾಡ್ರಾ ನಂ.30, 2ನೇ ಮಹಡಿ, ಹೆಬ್ಬಾಳ ರಸ್ತೆ, ಬೆಂಗಳೂರು–560024.

**ಪ್ರಕಟಣೆ**

1ನೇ ಅರ್ಜಿದಾರರ ಪತಿ ಮೃತ ಮಂಜರ್ ಪಾಷಾ ರವರು 1ನೇ ಪ್ರತಿವಾದಿಗಳ ಲಾರಿ ಸಂಖ್ಯೆ: ಕೆಎ–01–ಡಿ–5505 ಲಾರಿಯಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:04.04.2010ರಂದು ಕುಣಿಗಲ್–ತುಮಕೂರು ರಸ್ತೆ ಸರ್ಕಾರಿ ಪ್ರಾಥಮಿಕ ಶಾಲೆ ಗುಳೂರು ಗ್ರಾಮದ ಬಳಿ ಆದ ಅಪಘಾತದಲ್ಲಿ ಮೃತ ಪಟ್ಟಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ

ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.1262

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ:ಕಾಅಚಿಉವಿ-2/ಕಾಪಕಾ/ಎಫ್‌ಸಿ-2/2010, ದಿನಾಂಕ:11ನೇ ಆಗಸ್ಟ್, 2010**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| ಶ್ರೀಮತಿ ಪದ್ಮ ಕೋಂ ದಿ ಕೃಷ್ಣ, 40 ವರ್ಷ,<br>ಮಾಸ್ಟರ್ ವಿಶ್ವನಾಥ್ ಬಿನ್ ದಿ ಕೃಷ್ಣ, 17 ವರ್ಷ,<br>ಮಾಸ್ಟರ್ ಪ್ರವೀಣ್ ಬಿನ್ ದಿ ಕೃಷ್ಣ, 15 ವರ್ಷ,<br>ಮಾಸ್ಟರ್ ಅಬಿನಾಥ್ ಬಿನ್ ದಿ ಕೃಷ್ಣ, 7 ವರ್ಷ,<br>ವಾಸ: ವೆಳನೂರ್‌ಖಾನ್ ಎಸ್ಟೇಟ್, ಪಂಡರವಳ್ಳಿ ಅಂಚೆ, ಚಿಕ್ಕಮಗಳೂರು ತಾಲ್ಲೂಕು. | **ವಿರುದ್ಧ** | 1) ಮೆ: ವೆಳನೂರ್ ಖಾನ್ ಎಸ್ಟೇಟ್, ಮಲ್ಲೇನಹಳ್ಳಿ ಅಂಚೆ, ಚಿಕ್ಕಮಗಳೂರು ತಾಲ್ಲೂಕು.<br>2) ವ್ಯವಸ್ಥಾಪಕರು,<br>ದಿ ಓರಿಯಂಟಲ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಶಾಖಾ ಕಛೇರಿ, ಚಿಕ್ಕಮಗಳೂರು. |

**ಪ್ರಕಟಣೆ**

ಮೃತ ಕೃಷ್ಣ ಎಂಬುವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:08.01.2010 ರಂದು ಉದ್ಯೋಗದ ಸಮಯದಲ್ಲಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಹಾಗೂ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎಸ್. ವಿಜಯಕುಮಾರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ:ಕಾಅಚಿಉವಿ-2/ಕಾಪಕಾ/ಎಫ್‌ಸಿ-3/2010, ದಿನಾಂಕ:11ನೇ ಆಗಸ್ಟ್, 2010**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| ಶ್ರೀಮತಿ ಕೌಸಲ್ಯದೇವಿ ಕೋಂ ಮೃತ ಹರಿಶಂಕರ ಯಾದವ್, ಸುಮಾರು 50 ವರ್ಷ ವಯಸ್ಸು, ಮಿರ್ಜಾಪುರ ವಿಲೇಜ್, ಮನೆ ನಂ.36, ಮಹಾನತಿನಿ ಪೋಸ್ಟ್, ಡಬ್ಲ್ಯೂ ಚಂಪರನ್ ಡಿಸ್ಟ್ರಿಕ್ಟ್, ಬಿಹಾರ.<br>ಕೇರಾಫ್ ಮೆ: ಎನ್.ಕೆ.ಜಿ. ಜಯಂತಿ ಕಾಫಿ (ಪ್ರೈ) ಲಿ., ಕೆ.ಎಂ. ರೋಡ್, ಮುಗ್ತಿಹಳ್ಳಿ ಪೋಸ್ಟ್-577133, ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ. | **ವಿರುದ್ಧ** | 1) ಮೆ: ಎನ್.ಕೆ.ಜಿ. ಜಯಂತಿ ಕಾಫಿ (ಪ್ರೈ) ಲಿ., ಕೆ.ಎಂ. ರೋಡ್, ಮುಗ್ತಿಹಳ್ಳಿ ಪೋಸ್ಟ್-577133, ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ.<br>2) ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಚಿಕ್ಕಮಗಳೂರು. |

**ಪ್ರಕಟಣೆ**

ಮೃತ ಹರಿಶಂಕರ ಯಾದವ್ ಎಂಬುವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:01.02.2010 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಹಾಗೂ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎಸ್. ವಿಜಯಕುಮಾರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–2, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–2, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ:ಕಾಅಚಿಉವಿ–2/ಕಾಪಕಾ/ಎಫ್‌ಸಿ–4/2010, ದಿನಾಂಕ:11ನೇ ಆಗಸ್ಟ್, 2010**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| ಶ್ರೀಮತಿ ಸುನೀತಾ ಕೋಂ ದಿವಂಗತ ಹರೀಶ್, ವಯಸ್ಸು ಸುಮಾರು 20 ವರ್ಷ, ವಾಸ: ಗುಲ್ಲನ್‌ಪೇಟೆ, ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ. | **ವಿರುದ್ಧ** | ಶ್ರೀ ಲೊಬೋ, ಮಾಲೀಕರು, ರಕ್ಷಿದಿ ಎಸ್ಟೇಟ್, ರಕ್ಷಿದಿ ಗ್ರಾಮ, ಹಾನಬಾಳ್ ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. |

**ಪ್ರಕಟಣೆ**

ಮೃತ ಹರೀಶ್ ಬಿನ್ ವಿಠಲ ಎಂಬುವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:31.03.2010 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಹಾಗೂ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎಸ್. ವಿಜಯಕುಮಾರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–2, ಚಿಕ್ಕಮಗಳೂರು.

ಪಿ.ಆರ್.1269

## URBAN DEVELOPMENT DEPARTMENT

**NOTIFICATION No.UDD/627/MNX/2010, Bangalore, Dated:1st September, 2010**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdrawn from the acquisition the lands specified below in respect of which the Preliminary Notification was published in the Karnataka Gazette Dated:03-02-2003 in Part-III at pages from 1 to 179 vide Notification No.BDA/COMMR/ALAO/LA9/104/2002-03, Dated:03.02.2003. and Final Notification No.UDD 193 MNX 2004 Dated:23.02.2004 was published in the Karnataka Gazette Dated:23.02.2004 in Part-III under Sub-section(1) of Section-19 of BDA Act-1976 (Karnataka Act-12 of 1976) for formation of layout Called "ARKAVATHI LAYOUT".

**SCHEDULE**

**DISTRICT:BANGALORE TALUK: BANGALORE-EAST HOBLI:K.R. PURAM VILLAGE:GEDDALAHALLI**

| Sl. No. | Name of the Khatedar/ Anubhavadar Sri/Smt. | Sy. No. | Dry/ Wet/ Garden | Total Extent | Kharab | Remaining Extent | Assessment | Extent Acquired | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G | | | | |
| 1. | Govt. Land | 42/1A2 | dry | 1-24 | - | 1-24 | 2-33 | 1-24 | **1-24** | 42/4A2 | Drain | 42/1A1 | 42/1A3 |
| 2. | Shanta Bai bin Vasantharaju, Ranjith Kumar bin Vasanthakumar, Anil Kumar bin Vasanthakumar, Anthikumar bin Vasanthakumar, Narendrakumar bin Vasanthakumar | 42/2B | dry<br>gdn | 1-21 | - | 0-10<br>1-11 | 0-36<br>6-34 | 1-21 | **1-21** | 42/3B, 42/3A | 42/1A2 | 42/4A2 | 42/2A |
| 3. | Govt. Land | 42/4A2 | Karab | 0-35 | 0-35 | - | - | 0-35 | **0-35** | 42/4B | 42/1A2 | 42/4A1 | 42/2B |
| | **Total Extent With drawn** | | | | | | | | **4-00** | | | | |

**TOTAL EXTENT WITH DRAWN 04 ACRES ONLY (Four Acres Only)**

**(In favour of Smt. Shantha devi W/o Late B.S. Balachandra Sait and Smt. Shantha Bai W/o Late B. Basanth Raj)**

By Order and in the name of the Governor of Karnataka,

**S. RENUKARADHYA**

Under Secretary to Government,

Urban Development Department.

PR-1342

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 18 ಹೆಚ್‌ಹೆಚ್‌ಎಲ್ 2010, ಬೆಂಗಳೂರು, ದಿನಾಂಕ:31ನೇ ಆಗಸ್ಟ್, 2010**

ಭಾರತ ಚುನಾವಣಾ ಆಯೋಗವು "ರಾಜ್ಯ ವಿಧಾನ ಸಭೆಯ, 44–ಗುಲ್ಬರ್ಗಾ ದಕ್ಷಿಣ ಮತ್ತು 127–ಕಡೂರು, ವಿಧಾನ ಸಭಾ ಕ್ಷೇತ್ರಗಳಿಗೆ, ದಿನಾಂಕ:13.09.2010ರಂದು ಸೋಮವಾರ ಮತದಾನ ನಡೆಸಲು ಆದೇಶಿಸಿರುವುದರಿಂದ, ಸದರಿ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಗೆ ಒಳಪಡುವ ರಾಜ್ಯ ಸರ್ಕಾರಿ ಕಛೇರಿಗಳಲ್ಲಿ, ಕೇಂದ್ರ ಸರ್ಕಾರದ ಕಛೇರಿಗಳಲ್ಲಿ, ಬ್ಯಾಂಕ್‌ಗಳಲ್ಲಿ, ಕೇಂದ್ರ ಹಾಗೂ ರಾಜ್ಯ ಸರ್ಕಾರಿ ಕಾರ್ಖಾನೆ/ ಕೈಗಾರಿಕೆ ಸಂಸ್ಥೆಗಳಲ್ಲಿ, ಶಿಕ್ಷಣ ಸಂಸ್ಥೆಗಳಲ್ಲಿ (ಅನುದಾನಿತ ಶಿಕ್ಷಣ ಸಂಸ್ಥೆಗಳು ಹಾಗೂ ಶಾಲಾ ಕಾಲೇಜು ಸೇರಿದಂತೆ) ಕಾರ್ಯ ನಿರ್ವಹಿಸುತ್ತಿರುವ ಮತದಾರರಿಗೆ ಮತ ಚಲಾಯಿಸಲು ಅವಕಾಶ ಮಾಡಿಕೊಡುವ ದೃಷ್ಟಿಯಿಂದ, Negotiable Instruments Act 1881 ರ ಪ್ರಕಾರ ದಿನಾಂಕ:13.09.2010ರಂದು ಸೋಮವಾರ ದಂದು ವಿಶೇಷ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಿದೆ.

ಸದರಿ ಕ್ಷೇತ್ರಗಳಲ್ಲಿ ಮತದಾನವು ಸುಸೂತ್ರವಾಗಿ ನಡೆಯಲು ಅನುಕೂಲವಾಗುವಂತೆ ಮತದಾನ ನಡೆಯುವ ಮತಗಟ್ಟೆಗಳನ್ನು ಸರ್ಕಾರಿ ಕಛೇರಿಗಳಲ್ಲಿ ಹಾಗೂ ಸರ್ಕಾರಿ ಶಾಲೆಗಳಲ್ಲಿ ಸ್ಥಾಪಿಸಿದಲ್ಲಿ ಅಂತಹ ಕಛೇರಿ ಹಾಗೂ ಶಾಲೆಗಳಿಗೆ ದಿನಾಂಕ:12.09.2010ರಂದು ಭಾನುವಾರ (ಪೂರ್ವ ತಯಾರಿಗಾಗಿ) ಮತ್ತು ಮತ ಎಣಿಕೆಯ ದಿನದಂದು ಮತದಾನ ಎಣಿಕೆ ನಡೆಯುವ ಕೇಂದ್ರ ಸ್ಥಾನದಲ್ಲಿ ಮಾತ್ರ Negotiable Instruments Act 1881 ರ ಪ್ರಕಾರ ರಜಾ ಘೋಷಿಸಲು ಅವಶ್ಯಕತೆ ಇದ್ದಲ್ಲಿ ಸಂಬಂಧಪಟ್ಟ ಚುನಾವಣಾಧಿಕಾರಿಗಳು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮು**

ಪಿ.ಆರ್.1339

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಠಾಚಾರ)

## ಆರ್ಥಿಕ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಆಇ 120 ವಾತೆಸಿ 2010, ಬೆಂಗಳೂರು, ದಿನಾಂಕ:26ನೇ ಆಗಸ್ಟ್, 2010**

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದ ದಿನಾಂಕ: 22–02–1997 ರಿಂದ 31–12–2009 ರವರೆಗಿನ ಮುಂದುವರೆದ ಅವಧಿಯ ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 124 ವಾತೆಸಿ 96 ದಿನಾಂಕ: 10–10–1996.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 204 ವಾತೆಸಿ 96 ದಿನಾಂಕ: 20–03–1997.

3) ವಾಣಿಜ್ಯ ತೆರಿಗೆ ಆಯುಕ್ತರ ಪತ್ರಸಂಖ್ಯೆ:ಸಿಬ್ಬಂದಿ–1/ ಜಿಪಿಸಿಆರ್–30/2006–07 ದಿನಾಂಕ:12/05/2010.

ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1) ಮತ್ತು (2)ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ದಿನಾಂಕ:01–11–1956 ರಿಂದ 21–02–1977 ರವರೆಗೆ ಮತ್ತು ದಿನಾಂಕ: 22–02–1977 ರಿಂದ 27–09–1990ರ ವರೆಗೆ ಹಾಗೂ ದಿನಾಂಕ:28–09–1990 ರಿಂದ 21–02–1997 ರವರೆಗೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು.

2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 1 ಎಸ್‌ಆರ್‌ಡಿ 2001, ದಿನಾಂಕ:06.05.2002 ರಲ್ಲಿ ಕರ್ನಾಟಕ ವಾಣಿಜ್ಯ ತೆರಿಗೆಗಳ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ದಿನಾಂಕ:13–01–1998 ರಂದು ಖಾಲಿ ಇದ್ದ 117 ನೇರ ನೇಮಕಾತಿ ರಿಕ್ತ ಸ್ಥಾನಗಳನ್ನು ಪದೋನ್ನತಿಗೆ ವರ್ಗಾಯಿಸಿ ಆದೇಶ ಹೊರಡಿಸಲಾಗಿತ್ತು. ಅದಕ್ಕನುಗುಣವಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಆಇ 202 ವಾತೆಸಿ 2002, ದಿನಾಂಕ:13–10–2003 ರಲ್ಲಿ ವರ್ಗಾವಣೆ ಮಾಡಿದ 117 ನೇರ ನೇಮಕಾತಿ ರಿಕ್ತ ಸ್ಥಾನಗಳು ಒಳಗೊಂಡಂತೆ ಒಟ್ಟು 179 ರಿಕ್ತ ಸ್ಥಾನಗಳಿಗೆ ವಾಣಿಜ್ಯ ತೆರಿಗೆ ಅಧಿಕಾರಿಗಳನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುಗಳ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿ ಸಕ್ರಮಗೊಳಿಸಲಾಗಿತ್ತು.

3. ಗ್ರೂಪ್–ಸಿ ವೃಂದದಲ್ಲಿರುವ ವಾಣಿಜ್ಯ ತೆರಿಗೆ ಪರಿವೀಕ್ಷಕರ ವೃಂದದ ಕ್ರಮಾಂಕವನ್ನಾಧರಿಸಿ ಪ್ರಕಟಿಸಿದ ವಾಣಿಜ್ಯ ತೆರಿಗೆ ಅಧಿಕಾರಿ ವೃಂದದ ಜೇಷ್ಠತಾ ಪಟ್ಟಿಯು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುಗಳ ವೃಂದಕ್ಕೆ ಪೂರಕವಾದ ಹುದ್ದೆಯಾಗಿರುತ್ತದೆ. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 5142/2009 ರ ಪ್ರಕರಣದಲ್ಲಿ ವಾಣಿಜ್ಯ ತೆರಿಗೆ ಪರಿವೀಕ್ಷಕರ ಮತ್ತು ಇತರೇ ವೃಂದಗಳ ಜೇಷ್ಠತಾ ಪಟ್ಟಿಗಳನ್ನು ಹೊಸದಾಗಿ ತಯಾರಿಸಿ ಪ್ರಕಟಿಸುವಂತೆ ಆದೇಶಿಸಿರುತ್ತದೆ.

4. ಸರ್ಕಾರದ 2002ರ ತಿದ್ದುಪಡಿಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದಲ್ಲಿ ನೇರ ನೇಮಕಾತಿಯಿಂದ ಪದೋನ್ನತಿ ಕೋಟಾಗೆ ವರ್ಗಾವಣೆ ಮಾಡಿದ 117 ರಿಕ್ತ ಸ್ಥಾನಗಳನ್ನು ಕಾಲಕಾಲಕ್ಕೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ನೀಡಿದ ಸುತ್ತೋಲೆಯನ್ನು ಆಧರಿಸಿ, ದಿನಾಂಕ: 01–11–1956 ರಿಂದ 31–12–2009 ರವರೆವಿಗೂ ಉಂಟಾದ ನಿವೃತ್ತಿ, ಮರಣ, ಪದೋನ್ನತಿ, ರಾಜೀನಾಮೆ ಮತ್ತು ಹೊಸದಾಗಿ ಸೃಜಿಸಿದ ಮತ್ತು ರದ್ದುಪಡಿಸಿದ ಹುದ್ದೆಗಳ ಮಾಹಿತಿಯನ್ನು ಆಧರಿಸಿ, ನೇರ ನೇಮಕಾತಿಯಾದ ದಿನಾಂಕಕ್ಕೆ/ವೃಂದ ಮತ್ತು ನೇಮಕಾತಿಯಲ್ಲಿನ ತಿದ್ದುಪಡಿಯ ದಿನಾಂಕಕ್ಕೆ ಸರ್ವೋಚ್ಛ ನ್ಯಾಯಾಲಯ ನಿರ್ದೇಶಿಸಿದ ಮಾದರಿಯಲ್ಲಿಯೇ ಬ್ಲಾಕ್‌ಗಳ ಅವಧಿಗಳನ್ನು ರಚಿಸಲಾಗಿದೆ. ಈ ಹಿಂದೆ ರಿಕ್ತ ಸ್ಥಾನಗಳ ಆಧಾರದ ಮೇಲೆ ಪ್ರಕಟಿಸಿದ ಜೇಷ್ಠತಾ ಪಟ್ಟಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ನೀಡಿದ ಸುತ್ತೋಲೆಯನ್ವಯ ಪ್ರತಿ ಬ್ಲಾಕ್ ಅವಧಿಯಲ್ಲಿ ಉಂಟಾದ ರಿಕ್ತ ಸ್ಥಾನಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನಿಗಧಿಪಡಿಸಿದ ಅನುಪಾತದಂತೆ ನೇರ ನೇಮಕಾತಿಯಿಂದ ಉಂಟಾದ ರಿಕ್ತ ಸ್ಥಾನಗಳನ್ನು ನೇರ ನೇಮಕಾತಿಗೂ, ಪದೋನ್ನತಿಯಿಂದ ತೆರವಾದ ಸ್ಥಾನಗಳನ್ನು ಪದೋನ್ನತಿಗೂ ಪರಿಗಣಿಸಿ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 48 ಎಸ್‌ಎಸ್‌ಆರ್ 75 ದಿನಾಂಕ: 05.07.1976, ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 43 ಎಸ್‌ಎಸ್‌ಆರ್ 87 ದಿನಾಂಕ: 14.12.1987 ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 7 ಸೆಸೇನಿ 96 ದಿನಾಂಕ:16–07–1996 ರಲ್ಲಿನ ಸೂಚನೆಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ಪೋಷಕ ವೃಂದವಾದ ವಾಣಿಜ್ಯ ತೆರಿಗೆ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಹಾಗೂ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು ಮತ್ತು ಅದರಡಿಯಲ್ಲಿ ಹೊರಡಿಸಲಾದ ಸುತ್ತೋಲೆ ಸಂಖ್ಯೆ: ಡಿಪಿಎಆರ್ 3 ಎಸ್‌ಎಸ್‌ಆರ್ 81 ದಿನಾಂಕ:06–02–1981 ರಲ್ಲಿನ ಸೂಚನೆಗಳ ಹಿನ್ನೆಲೆಯಲ್ಲಿ ಅಧಿಕಾರಿಗಳು ಕರ್ನಾಟಕ ಲೋಕಸೇವಾ ಆಯೋಗದಿಂದ ಹಾಗೂ ವಿಶೇಷ ನೇಮಕಾತಿಯಡಿಯಲ್ಲಿ ಪ್ರಕಟಿಸಿದ ಅಧಿಸೂಚನೆಯ ಆಧಾರದ ಮೇಲೆ ನೇರ ನೇಮಕಾತಿಯಿಂದ ಬಂದ ಅಭ್ಯರ್ಥಿಗಳನ್ನು ನೇರ ನೇಮಕಾತಿ ಹುದ್ದೆಗಳಲ್ಲಿ ಹಾಗೂ ಪದೋನ್ನತಿ ಹುದ್ದೆಗಳಿಗೆ ಹಿಂದಿನ ಹುದ್ದೆಯಾದ ವಾಣಿಜ್ಯ ತೆರಿಗೆ ಅಧಿಕಾರಿಗಳ ಜೇಷ್ಠತಾ ಪಟ್ಟಿಯಲ್ಲಿನ ಜೇಷ್ಠತೆಯನ್ನು ಆಧರಿಸಿ ಪದೋನ್ನತಿ ಹೊಂದಿದ ಅಧಿಕಾರಿಗಳನ್ನು ತುಂಬಿದ ಜೇಷ್ಠತಾ ಪಟ್ಟಿಯನ್ನು ತಯಾರಿಸಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:21–05–2010 ರಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಿ ಸದರಿ ಜೇಷ್ಠತೆ ಮತ್ತು ಅದಕ್ಕೆ ಸಂಬಂಧಿಸಿದಂತೆ ಇತರೇ ಸೇವಾ ವಿಷಯಗಳ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಬಾಧಿತರಾದ ಅಧಿಕಾರಿಗಳು/ನೌಕರರು ಆಕ್ಷೇಪಣೆಗಳನ್ನು ಲಿಖಿತ ಮೂಲಕ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ 30 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಈ ರೀತಿ ನಿಗಧಿತ ದಿನಾಂಕದೊಳಗೆ ಸ್ವೀಕರಿಸಿದ 22 ಆಕ್ಷೇಪಣೆಗಳನ್ನು ಪರಿಶೀಲಿಸಲಾಯಿತು. ಅದರಲ್ಲಿ ಶ್ರೀ. ಎನ್. ನಾಗಪ್ರಕಾಶ್ ಹಾಗೂ ನಾಣಿಯಪ್ಪ ಇವರ ಆಕ್ಷೇಪಣೆಗಳನ್ನು ಪರಿಶೀಲಿಸಿ ಸೂಕ್ತ ತಿದ್ದುಪಡಿ ಮಾಡಿದೆ.

5. ಶ್ರೀ. ಬಿ.ಎ. ನಾಣಿಯಪ್ಪ, ಬಿ.ವಿ. ರವಿ, ಹೆಚ್.ಎಸ್. ಜಿಯಾವುಲ್ಲಾಖಾನ್, ಸಿದ್ದಪ್ಪ, ಎ. ವೆಂಕಟಸ್ವಾಮಿ, ಎಂ.ಜಿ. ಹೀರೇಮಠ್, ಮಹಮ್ಮದ್ ಮಸಲೇಉದ್ದೀನ್, ಬಿ. ಮಧುಮತಿ, ಶ್ರೀನಿವಾಸ, ಸಿದ್ದರಾಮಯ್ಯ, ಕೆ.ವಿ. ಸತ್ಯಪ್ರಕಾಶ್, ಎನ್.ಕೆ. ಹೇಮಂತ್ ಕುಮಾರ್, ವೈ.ಸಿ. ಶಿವಕುಮಾರ್, ಟಿ.ಎಂ. ರಂಗಸ್ವಾಮಿ, ಎಂ. ಬಸವಣ್ಣ, ಡಿ. ಜಗನ್ನಾಥ ಸಾಗರ್, ಕೆ. ಗೌರಿ, ಹೆಚ್.ಎಸ್. ರಾಜೇಂದ್ರಸಿಂಗ್, ಸಯ್ಯದ್ ಜಮಾಲ್, ಎಸ್. ಬೀರಪ್ಪ, ಎಸ್.ಕೆ. ನಾಯ್ಕರ್, ಎಸ್. ಪ್ರತಾಪ್ ಕುಮಾರ್, ಡಿ. ವೆಂಕಟಪ್ಪ, ಎಂ.ಸಿ. ಮಹದೇವ, ಎಂ. ಪಟಾಲಪ್ಪ, ಎಸ್. ಲಕ್ಷ್ಮೀಪತಯ್ಯ, ನಾರಾಯಣಪ್ಪ, ಎ.ಕೆ. ಚಿಟಗುಪ್ಪಿ, ಅಡೂರ್ ಬಿ. ಷಂಸುದ್ದೀನ್ ಇವರುಗಳು ಶ್ರೀ. ಜಿ.ಟಿ. ರಾಮಸ್ವಾಮಿ ಇವರ ಪ್ರಕರಣವನ್ನು ಉದಾಹರಿಸಿ ಈಗಾಗಲೇ ಅಂತಿಮವಾಗಿ ಪ್ರಕಟಿಸಿದ ಜ್ಯೇಷ್ಠತಾ ಪಟ್ಟಿಯನ್ನು ಯಾವುದೇ ಹಂತದಲ್ಲಿಯೂ ಮಾರ್ಪಡಿಸಬಾರದೆಂದು ಆಕ್ಷೇಪಣೆ ಸಲ್ಲಿಸಿರುತ್ತಾರೆ. ಈ ಆಕ್ಷೇಪಣೆಗೆ ಸಂಬಂಧಿಸಿದಂತೆ ಕರ್ನಾಟಕ ಉಚ್ಚ ನ್ಯಾಯಾಲಯ ನೀಡಿದ ತೀರ್ಪನ್ನು ಕೆಳಕಂಡಂತೆ ಪರಿಶೀಲಿಸಿದೆ.

ಮೇ: ಜಿ.ಟಿ. ರಾಮಸ್ವಾಮಿ ಪ್ರಕರಣದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ತನ್ನ ತೀರ್ಪಿನಲ್ಲಿ ಕೆಳಕಂಡಂತೆ ಆದೇಶಿಸಿದೆ.

> *"We declare that the seniority list published by the Government in the cadre of ACTOs as on 01-07-1976 in O.M. No. FD 94 CSE 75(1) dated 13-12-1976 had become final and that in the preparation of further seniority lists in the cadre, Government should only proceed on the rankings assigned in that list except when a modification is called for in compliance of an order to be made by the Supreme Court or this Court in any other case"*

6. ಈಗಾಗಲೇ ಅಧಿಸೂಚನೆ ಸಂಖ್ಯೆ:ಆಇ 124 ವಾತೆಸಿ 96 ದಿನಾಂಕ:10–10–1996, ಆಇ 204 ವಾತೆಸಿ 96 ದಿ:20–08–1997 ಹಾಗೂ ಆಇ 44 ವಾತೆಸಿ 98 ದಿ:09–10–2002ರಲ್ಲಿ ಪ್ರಕಟಿಸಿದ ಅಂತಿಮ ಪಟ್ಟಿಯನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿಲ್ಲ. ಅದಲ್ಲದೇ ಪೂರಕ ವೃಂದವಾದ ವಾಣಿಜ್ಯ ತೆರಿಗೆ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯು ಸಹ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿಲ್ಲವಾದ್ದರಿಂದ ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮೆ: ಜಿ.ಟಿ. ರಾಮಸ್ವಾಮಿ ಇವರ ಪ್ರಕರಣದಲ್ಲಿ "ಈಗಾಗಲೇ ಒಂದು ಬಾರಿ ಅಂತಿಮವೆಂದು ಪ್ರಕಟಿಸಿದ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಯಾವುದೇ ಕಾರಣಕ್ಕೂ ಸಹ ನ್ಯಾಯಾಲಯದ ಸ್ಪಷ್ಟ ನಿರ್ದೇಶನವಿಲ್ಲದೇ ಬದಲಿಸಬಾರದೆಂಬ ಸ್ಪಷ್ಟ ನಿರ್ದೇಶನದ ಹಿನ್ನೆಲೆಯಲ್ಲಿ ದಿನಾಂಕ 10–10–1996, 20–08–1997 ಹಾಗೂ 09–10–2002ರಲ್ಲಿ ಪ್ರಕಟಿಸಿದ ಜ್ಯೇಷ್ಠತಾ ಪಟ್ಟಿಯನ್ನು ಯಥಾವತ್ತಾಗಿ ಕಾಯ್ದಿರಿಸಲು ನಿರ್ಧರಿಸಲಾಗಿದೆ.

7. 2006ರಲ್ಲಿ ನೇರ ನೇಮಕಾತಿಯಾದ 29 ಅಧಿಕಾರಿಗಳು, 2002ರಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಮಾಡಿದ ತಿದ್ದುಪಡಿಯ ಬಗ್ಗೆ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿದ್ದು, ಸರ್ಕಾರಕ್ಕೆ ಯಾವುದೇ ವೃಂದ ಮತ್ತು ನಿಯಮಗಳಿಗೆ ತಿದ್ದುಪಡಿ ಮಾಡಲು ಅಧಿಕಾರವಿದ್ದು, ತಿದ್ದುಪಡಿಯ ಆಧಾರದ ಮೇಲೆ ಈಗಾಗಲೇ ದಿ:13–10–2003ರಂದು 179 ವಾಣಿಜ್ಯ ತೆರಿಗೆ ಅಧಿಕಾರಿಗಳನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರನ್ನಾಗಿ ಸ್ಥಾನಪನ್ನ ಮುಂಬಡ್ತಿ ನೀಡಿದೆ. ಈ ಮುಂಬಡ್ತಿ ಆದೇಶವನ್ನು ಈವರೆವಿಗೂ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿರುವುದಿಲ್ಲ. ಅದಲ್ಲದೇ 2006ರ ನೇರ ನೇಮಕಾತಿ ಅಭ್ಯರ್ಥಿಗಳು ಇಲಾಖೆಗೆ ಹಾಜರಾಗುವ ಮುಂಚೆಯೇ ಎಲ್ಲಾ ಕ್ರಮಗಳು ಪೂರ್ಣಗೊಂಡಿರುತ್ತದೆ. 2006ರ ನೇರ ನೇಮಕಾತಿ ಅಭ್ಯರ್ಥಿಗಳು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ:114,127,150,571, 585/2010ರಲ್ಲಿ ಅರ್ಜಿ ಸಲ್ಲಿಸಿ 2002ರ ತಿದ್ದುಪಡಿಯ ಬಗ್ಗೆ ಪ್ರಶ್ನಿಸಿದ್ದು, ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿ ತನ್ನ ತೀರ್ಪಿನಲ್ಲಿ ದಿನಾಂಕ 19–02–2010ರಲ್ಲಿ ಕೆಳಕಂಡಂತೆ ಆದೇಶಿಸಿದೆ.

> Reiteration of the aforesaid views in this case shall not be construed as expression of our opinion on the aspect of de-freezing of direct recruitment vacancies in this case. Incidentally, it may be mentioned that in the aforesaid case the Applicants had no locus standi to question the freezing of direct recruitment vacancies, as the Applicants therein had entered service subsequent to the freezing of direct recruitment vacancies

8. ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿನಾಂಕ:19.02.2010 ರ ಮೇಲ್ಕಂಡ ಆದೇಶವನ್ನು 2006 ರಲ್ಲಿ ನೇರ ನೇಮಕಾತಿ ಹೊಂದಿದ ಅಧಿಕಾರಿಗಳು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:79942/2010 ರಲ್ಲಿ ಪ್ರಶ್ನಿಸಿದ್ದು ಪ್ರಕರಣ ಬಾಕಿ ಇದೆ. ಈ ಸಂಬಂಧದಲ್ಲಿ ಉಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪಿಗೊಳಪಟ್ಟಿರುತ್ತದೆ.

9. ಅದಲ್ಲದೇ ಸರ್ವೋಚ್ಚ ನ್ಯಾಯಾಲಯವು ಕೆಲವೊಂದು ಪ್ರಕರಣಗಳಲ್ಲಿ ನೇರ ನೇಮಕಾತಿ ಅಭ್ಯರ್ಥಿಗಳು ಸರ್ಕಾರಿ ಸೇವೆಗೆ ಹಾಜರಾದ ದಿನಾಂಕವನ್ನು ಜ್ಯೇಷ್ಠತೆಗೆ ಆಧಾರಿಸಬೇಕೇ ಹೊರತು ರಿಕ್ತಸ್ಥಾನ ಉಂಟಾದ ದಿನಾಂಕದಿಂದಲ್ಲ ಎಂದು ತೀರ್ಪು ನೀಡಿದ್ದು ಅದನ್ನು ಆಧಾರಿಸಿ ನೇರ ನೇಮಕಾತಿ ಅಭ್ಯರ್ಥಿಗಳು ಸರ್ಕಾರಿ ಸೇವೆಗೆ ಹಾಜರಾದ ದಿನಾಂಕದಿಂದ ಜ್ಯೇಷ್ಠತೆ ನೀಡಿದೆ.

10. ಮುಂದುವರೆದಂತೆ 2006ರಲ್ಲಿ ನೇರ ನೇಮಕಾತಿಯಾದ 1998 ಮತ್ತು 1999ನೇ ಬ್ಯಾಚಿನ ಅಧಿಕಾರಿಗಳಿಗೆ ಆದೇಶ ನೀಡುವಾಗ 1999ನೇ ಬ್ಯಾಚಿನ ಅಧಿಕಾರಿಗಳಿಗೆ 1998ನೇ ಬ್ಯಾಚಿನ ಅಧಿಕಾರಿಗಳಿಗಿಂತ ಮೊದಲು ನೇಮಕಾತಿ ಆದೇಶ ನೀಡಿದ್ದು, ಆದೇಶ ನೀಡುವಾಗ ಲಿಖಿತ ಷರತ್ತು ಪತ್ರವನ್ನು ಪಡೆಯಲಾಗಿತ್ತು. ಈ ಸಂಬಂಧ ರೆವಿನ್ಯೂ ಇಲಾಖೆಯ ಅಧಿಕಾರಿಗಳು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿ, ಇಲ್ಲಿ ದಾವೆ ಹೂಡಿದ್ದು, ಸದರಿ ಆದೇಶದ ಮೇಲೆ, ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ, ಸರ್ಕಾರ ದಾವೆ ಹೂಡಿದ್ದು, ಅರ್ಜಿ ಸಂಖ್ಯೆ 10605–10620/2010ರ (S-KAT) ಆದೇಶದ ಮೇಲೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ದಿನಾಂಕ 06–04–2010ರಂದು ಕೆಳಕಂಡಂತೆ ಮಧ್ಯಂತರ ಆದೇಶ ನೀಡಿದೆ.

> In the light of the fact that the Government has not yet started the process of preparing any seniority list, we are of the opinion even if the Government initiates the process of preparing the seniority list, the same shall be subject to the result of the present writ petition.

Further, the seniority list so prepared shall not be published and shall not be finalized and given effect to pending disposal of the writ petition. It is further directed so far as promotions either from 1998 notification or from 1999 notification, status-quo shall be maintained.

11. ಮೇಲ್ಕಂಡ ಮಧ್ಯಂತರ ಆದೇಶವೂ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ನೇಮಕಾತಿಯಾದ ಅಧಿಕಾರಿಗಳಿಗೂ ಅನ್ವಯವಾಗುವುದರಿಂದ 2006ರ ನೇರ ನೇಮಕಾತಿ ಅಭ್ಯರ್ಥಿಗಳಾದ 1998 ಮತ್ತು 1999ನೇ ಬ್ಯಾಚ್ ಹಾಗೂ ಮುಂದುವರಿದ ಬ್ಯಾಚ್‌ಗಳ ಜ್ಯೇಷ್ಠತೆಯನ್ನು ಪ್ರಕಟಪಡಿಸುವುದನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಮಧ್ಯಂತರ ಆದೇಶದನ್ವಯ ತಡೆಹಿಡಿಯಲಾಗಿದೆ. ಈ ಸಂಬಂಧದಲ್ಲಿ ಉಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪಿಗೊಳಪಟ್ಟಿರುತ್ತದೆ.

12. ಸರ್ಕಾರ ಸ್ಥಾನಪನ್ನ ಮುಂಬಡ್ತಿ ನೀಡುವಾಗ ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದಕ್ಕೆ ಅರ್ಹತಾ ದಿನಾಂಕವನ್ನು ನೀಡಿದ್ದು, ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿಲ್ಲವಾದ್ದರಿಂದ, ಸದರಿ ಆದೇಶದಲ್ಲಿ ನೀಡಿದ ಅರ್ಹತಾ ದಿನಾಂಕವನ್ನೇ ಆಧಾರಿಸಿ ಅದರೊಳಗೆ ಹಿಂದಿನ ಹುದ್ದೆಯ Inter-se ಸೀನಿಯಾರಿಟಿಯನ್ನು ಆಧಾರಿಸಿ ಜ್ಯೇಷ್ಠತೆಯನ್ನು ನೀಡಲಾಗಿದೆ.

13. ಶ್ರೀ. ಬಾಣೇಗೌಡ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಈಗಾಗಲೇ ಅಂತಿಮಗೊಳಿಸಿದ್ದ ಜ್ಯೇಷ್ಠತಾ ಪಟ್ಟಿಯಲ್ಲಿನ ತಪ್ಪನ್ನು ಸರಿಪಡಿಸುವಂತೆ ಕೋರಿದ್ದು ಅದನ್ನು ಪ್ರತ್ಯೇಕವಾಗಿ ಪ್ರಸ್ತಾವನೆ ಸಲ್ಲಿಸುವಂತೆ ಆಯುಕ್ತರಿಗೆ ಸೂಚಿಸಲಾಗಿದೆ.

14. ಶ್ರೀ. ತೋಂಟದಾರ್ಯ, ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಇದು ಪದೋನ್ನತಿಯನ್ನು ಪುನರ್‌ವಿರ್ಮಶಿಸಬೇಕಾದ ಹಿನ್ನಲೆಯಲ್ಲಿ ಆಯುಕ್ತರಿಗೆ ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

15. ಶ್ರೀ ಮೇಘಣ್ಣನವರ್ ರೇನಿಶ್ವರ್ ಡಿ. ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ದಿನಾಂಕ:13.10.2003 ರ ಪದೋನ್ನತಿ ಆದೇಶವನ್ನು ಆಧರಿಸಿ ಜೇಷ್ಠತೆಯನ್ನು ನೀಡಲಾಗಿದೆ. ಈ ಪದೋನ್ನತಿ ಆದೇಶವನ್ನು ಈವರೆವಿಗೂ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿರುವುದಿಲ್ಲ.

16. ಶ್ರೀ. ಕ್ಯಾಪ್ಟನ್ ಗೋಪಿಚಂದ್ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಪ್ರತಿ ಬ್ಲಾಕ್ ಅವಧಿಯಲ್ಲಿ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡು ಇಲಾಖೆಗೆ ಬಂದ ನೇರ ನೇಮಕಾತಿ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗಿದೆ. ಆ ಸಮಯದಲ್ಲಿ ಖಾಲಿ ಇದ್ದ ಹುದ್ದೆಗಳಿಗೆ ಆಯ್ಕೆಗೊಂಡು ಇಲಾಖೆಗೆ ಬಂದ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗಿದೆ.

17. ಶ್ರೀ. ಮಲ್ಲಾನಾಯಕ್, ಹೆಚ್.ಸಿ. ನಾಗರಾಜು, ಡಿ.ಕೆ. ಕುಲಕರ್ಣಿ, ಕೆ. ಮಂಜುನಾಥ್, ಎಂ. ನಾಗೇಂದ್ರ, ಟಿ. ಗೋವಿಂದಯ್ಯ, ಇ.ಎಸ್. ವಿಜೇಂದ್ರ, ಎಸ್.ಎನ್. ಶಿವಣ್ಣ ಮತ್ತು ಮೆಹಬೂಬ್ ಸುಬಾನ್ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಇವರು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುಗಳಾಗಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಇವರಿಗೆ ಪದೋನ್ನತಿ ನೀಡಿದ ನಂತರವೇ ನಿಯಮಗಳಡಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದಲ್ಲಿ ಜ್ಯೇಷ್ಠತೆಯನ್ನು ನಿರ್ಧರಿಸಲಾಗುತ್ತದೆ.

18. ಮೇಲ್ಕಂಡ ಎಲ್ಲಾ ಆಕ್ಷೇಪಣೆಗಳನ್ನು ಪರಿಶೀಲಿಸಿ ಈಗಾಗಲೇ ದಿನಾಂಕ:21–02–1997ರ ಅಂತ್ಯದವರೆಗೆ ಪ್ರಕಟಿಸಿದ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಯಥಾವತ್ತಾಗಿ ಮುಂದುವರೆಸಿ, ನಂತರದ ಮುಂದುವರಿದ ಅವಧಿಗೆ ಅಂದರೆ ದಿನಾಂಕ:22–02–1997ರ ನಂತರದ ಅವಧಿಗೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ.

19. ಈ ಜ್ಯೇಷ್ಠತಾ ಪಟ್ಟಿಯು ಕೆಳಗಿನ ವೃಂದಗಳ ಜೇಷ್ಠತಾ ಪಟ್ಟಿಯಲ್ಲಿ ಆಗುವ ಬದಲಾವಣೆಗಳು ಮತ್ತು ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ರಾಜ್ಯ ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪಿನ ಮೇರೆಗೆ ಮಾಡಬಹುದಾದ ಬದಲಾವಣೆಗಳಿಗೊಳಪಟ್ಟಿರುತ್ತದೆ.

20. ಈ ಆದೇಶದ ಅನುಬಂಧ–1 ರಲ್ಲಿ ಬ್ಲಾಕ್ ಅವಧಿಯನ್ನು, ಅನುಬಂಧ–2 ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿಂಗಡಣೆಯನ್ನು, ಅನುಬಂಧ–3 ರಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದ ದಿನಾಂಕ:22.02.1997 ರಿಂದ 31.12.2009 ರವರೆಗಿನ ಮುಂದುವರೆದ ಭಾಗಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಹಾಗೂ ಅನುಬಂಧ–4, 4ಎ ಮತ್ತು 4ಬಿ ಯಲ್ಲಿ ಉದ್ಭವಿಸಿದ ರಿಕ್ತ ಸ್ಥಾನಗಳ ವಿವರಗಳನ್ನು ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್.ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾ.ತೆ–2).

